# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 36
ಸದಸ್ಯರ ಹೆಸರು : ಶ್ರೀ ಪ್ರತಾಪಚಂದ್ರ ಶೆಟ್ಟಿ
ಉತ್ತರಿಸುವ ಸಚಿವರು : ಸಾರಿಗೆ ಸಚಿವರು
ಉತ್ತರಿಸಬೇಕಾದ ದಿನಾಂಕ : 09-07-2018

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಉಪ ಸಾರಿಗೆ ಆಯುಕ್ತರ ಕಛೇರಿ (ಎ.ಆರ್.ಟಿ.ಓ) ಗಳನ್ನು ಮಂಜೂರು ಮಾಡುವಾಗ ವಾಹನಗಳ ಸಂಖ್ಯೆಗೆ ಅನುಗುಣವಾಗಿ ಮಂಜೂರು ಮಾಡಲಾಗುವುದೇ; (ಮಾನದಂಡದ ಪ್ರತಿ ಒದಗಿಸುವುದು) | **ಹೌದು.**<br>ಪ್ರಸ್ತುತ ಸಾರಿಗೆ ಇಲಾಖೆಯಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಗಳನ್ನು ಪ್ರಾರಂಭಿಸಲು ಮಾನದಂಡಗಳನ್ನು ನಿಗದಿಪಡಿಸಲಾಗಿದ್ದು, ವಿವರಗಳು ಈ ಕೆಳಕಂಡಂತಿವೆ:<br>1) ಪ್ರಸ್ತಾಪಿತ ಉಪ ವಿಭಾಗ/ತಾಲ್ಲೂಕು ಕೇಂದ್ರಕ್ಕೆ ಒಳಪಡುವ ವ್ಯಾಪ್ತಿಯಲ್ಲಿ ಈಗಾಗಲೇ ನೋಂದಣಿಯಾಗಿ ಉಪಯೋಗದಲ್ಲಿರುವ ಎಲ್ಲಾ ವರ್ಗಗಳ ವಾಹನಗಳಿಂದ ಕನಿಷ್ಠ ರೂ.20 ಕೋಟಿ ರಾಜಸ್ವ ವಸೂಲಾಗುತ್ತಿರಬೇಕು.<br>2) ಪ್ರಸ್ತಾಪಿತ ಕಛೇರಿ ವ್ಯಾಪ್ತಿಯಲ್ಲಿ ಕನಿಷ್ಠ 30,000 ವಾಹನಗಳು ನೋಂದಣಿಯಾಗಿರಬೇಕು.<br>3) ಪ್ರಸ್ತಾಪಿತ ಕಛೇರಿ ವ್ಯಾಪ್ತಿಯಲ್ಲಿ ಕನಿಷ್ಠ 10,000 ಚಾಲನಾ ಲೈಸೆನ್ಸ್‌ಗಳು ನೀಡಿಕೆಯಾಗಿರಬೇಕು.<br>4) ಆ ಭಾಗದಲ್ಲಿ ವಾರ್ಷಿಕ ಸರಾಸರಿ 10,000 ವಾಹನಗಳು ನೋಂದಣಿಯಾಗಿರಬೇಕು.<br>5) ಪ್ರಸ್ತಾಪಿತ ಕಛೇರಿಯು ಮೂಲ ಕಛೇರಿಯಿಂದ ಗ್ರಾಮೀಣ ಭಾಗಗಳಿಗೆ 50 ಕಿ.ಮೀ. ಅಂತರದಲ್ಲಿರಬೇಕು. |
| (ಆ) | ರಾಜ್ಯದಲ್ಲಿ ರಾಜಕೀಯ ಪ್ರಭಾವ ಹಾಗೂ ಅಧಿಕಾರಿಗಳ ನಿರ್ಲಕ್ಷ್ಯದಿಂದಾಗಿ ಅವಶ್ಯಕತೆ, ಅಗತ್ಯತೆ ಇರುವಲ್ಲಿ ಉಪ ಸಾರಿಗೆ ಆಯುಕ್ತರ ಕಛೇರಿ (ಎ.ಆರ್.ಟಿ.ಓ) ಗಳು ಮಂಜೂರುಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಅವಶ್ಯಕತೆ ಆಧರಿಸಿ, ರಾಜ್ಯದಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಗಳನ್ನು ಮಂಜೂರು ಮಾಡಲಾಗಿರುತ್ತದೆ. |
| (ಇ) | ಉಡುಪಿ ಜಿಲ್ಲೆಯಲ್ಲಿನ ಎಲ್ಲಾ ತಾಲ್ಲೂಕುಗಳಿಗಿಂತ ಅತೀ ಹೆಚ್ಚು ವಾಹನಗಳನ್ನು ಹೊಂದಿರುವ ಕುಂದಾಪುರ ಉಪ ವಿಭಾಗಕ್ಕೆ ಇಲ್ಲಿಯತನಕ ಉಪ ಸಾರಿಗೆ ಆಯುಕ್ತರ ಕಛೇರಿ (ಎ.ಆರ್.ಟಿ.ಓ) ಮಂಜೂರು ಮಾಡದೆ ನಿರ್ಲಕ್ಷಿಸಲು ಕಾರಣಗಳೇನು; ಇನ್ನಾದರೂ ಕುಂದಾಪುರಕ್ಕೆ ಉಪ ಸಾರಿಗೆ ಆಯುಕ್ತರ ಕಛೇರಿ ಮಂಜೂರು ಮಾಡಲಾಗುವುದೇ? | ಉಡುಪಿ ಜಿಲ್ಲೆಯ ಕುಂದಾಪುರದಲ್ಲಿ ಹೊಸದಾಗಿ ಪ್ರಾದೇಶಿಕ ಸಾರಿಗೆ ಕಛೇರಿ ಪ್ರಾರಂಭಿಸುವ ಕುರಿತು ಸಂಬಂಧಪಟ್ಟ ಇಲಾಖಾ ವಿಭಾಗಾಧಿಕಾರಿಯಿಂದ ವರದಿ ಕೋರಲಾಗಿದೆ. ಸದರಿ ವರದಿ ಆಧರಿಸಿ, ಮುಂದಿನ ಕ್ರಮ ವಹಿಸಲಾಗುವುದು. |

ಸಾರಿಇ 34 ಸಾಇಪ್ರ 2018

(ಡಿ.ಸಿ.ತಮ್ಮಣ್ಣ)
ಸಾರಿಗೆ ಸಚಿವರು